# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 767

ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಡೀಸೆಲ್ ಬೆಲೆ ಏರಿಕೆಯ ಹಿನ್ನೆಲೆಯಲ್ಲಿ ಸಾರಿಗೆ ಸಂಸ್ಥೆ ಪ್ರಯಾಣ ದರವನ್ನು ಏರಿಕೆ ಮಾಡಲಾಗಿದೆಯೇ; ಮಾಡಿದ್ದಲ್ಲಿ, ಶೇಕಡ ಎಷ್ಟು ಹೆಚ್ಚು ಮಾಡಲಾಗಿದೆ; | ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಟಿಡಿ 85 ಟಿಆರ್‌ಎ 2000, ದಿನಾಂಕ: 30.09.2000ರಂತೆ ಡೀಸೆಲ್ ದರದಲ್ಲಿ ಹೆಚ್ಚಳ/ ಕಡಿಮೆಯಾದಾಗ ಹಾಗೂ ಸಿಬ್ಬಂದಿಯವರಿಗೆ ನೀಡುವ ತುಟ್ಟಿಭತ್ಯೆಯಲ್ಲಿನ ಹೆಚ್ಚಳವನ್ನು ಪರಿಗಣಿಸಿ ಬಸ್ ಪ್ರಯಾಣ ದರ ಪರಿಷ್ಕರಣೆಗೆ ಕ್ರಮ ಕೈಗೊಳ್ಳಲಾಗುತ್ತಿದೆ.<br>**ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಹಾಗೂ ಈ.ಕ.ರ.ಸಾ.ಸಂಸ್ಥೆಗಳಿಗೆ** ಸಂಬಂಧಿಸಿದಂತೆ ಡೀಸೆಲ್ ಬೆಲೆ ಕಡಿಮೆಯಾದ ಹಿನ್ನೆಲೆಯಲ್ಲಿ ದಿನಾಂಕ: 9/10.01.2015ರಿಂದ ಜಾರಿಗೆ ಬರುವಂತೆ ಶೇ.2ರಷ್ಟು ಬಸ್ ಪ್ರಯಾಣ ದರಗಳನ್ನು ಕಡಿಮೆ ಮಾಡಲಾಗಿ, ನಂತರದಲ್ಲಿ ಡೀಸೆಲ್ ದರ ಹಾಗೂ ಸಿಬ್ಬಂದಿ ವೆಚ್ಚಗಳಲ್ಲಿ ಗಣನೀಯ ಹೆಚ್ಚಳವಾದ ಹಿನ್ನೆಲೆಯಲ್ಲಿ 5 ವರ್ಷಗಳ ನಂತರ ಅಂದರೆ ದಿನಾಂಕ: 25/26.02.2020ರಿಂದ ಜಾರಿಗೆ ಬರುವಂತೆ ಬಸ್ ಪ್ರಯಾಣ ದರವನ್ನು ಶೇ.12ರಷ್ಟು ಹೆಚ್ಚಿಸಿ ಪರಿಷ್ಕರಿಸಲಾಗಿದೆ.<br>**ಬೆಂ.ಮ.ಸಾ.ಸಂಸ್ಥೆಯ** ಬಸ್ ಪ್ರಯಾಣ ದರಗಳನ್ನು ಪ್ರಸ್ತುತ ಹೆಚ್ಚಿಸಿರುವುದಿಲ್ಲ. |
| ಆ. | ಸಾರಿಗೆ ಸಂಸ್ಥೆಯ ಟಿಕೆಟ್ ದರವನ್ನು ಹೆಚ್ಚಿಸಲು ಯಾವ ಮಾನದಂಡವನ್ನು ಅನುಸರಿಸಲಾಗುವುದು; ಯಾವ ರೀತಿ ಟಿಕೆಟ್ ದರ ನಿಗದಿಗೊಳಿಸಲಾಗುವುದು; | |
| ಇ. | ಟಿಕೆಟ್ ದರವನ್ನು ಹೆಚ್ಚಿಸುವುದರಿಂದ ಪ್ರಯಾಣಿಕರಿಗೆ ತೊಂದರೆಯಾಗುವುದಿಲ್ಲವೆ;<br>ಸೋರಿಕೆ ಮತ್ತು ಅನಾವಶ್ಯಕ ವೆಚ್ಚಗಳನ್ನು ತಡೆಗಟ್ಟಿ ನಷ್ಟವನ್ನು ಸರಿದೂಗಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ? | ಡೀಸೆಲ್ ವೆಚ್ಚ ಸೇರಿದಂತೆ ಸಾರಿಗೆ ಕಾರ್ಯಾಚರಣೆಗೆ ಉಂಟಾಗುವ ಸಿಬ್ಬಂದಿ ವೆಚ್ಚ, ವಾಹನ ಬಿಡಿಭಾಗಗಳ ವೆಚ್ಚ, ಇತರೆ ಬಳಕೆ ಸಾಮಗ್ರಿಗಳ ವೆಚ್ಚ ಹಾಗೂ ಇತರೆ ಕಾರ್ಯಾಚರಣೆ ವೆಚ್ಚಗಳ ಏರಿಕೆಯಿಂದ ಒಟ್ಟಾರೆ ಕಾರ್ಯಾಚರಣೆ ವೆಚ್ಚವು ಹೆಚ್ಚಾದಾಗ ಅದಕ್ಕನುಗುಣವಾಗಿ ಬಸ್ ಪ್ರಯಾಣ ದರವನ್ನು ಹೆಚ್ಚಿಸುವುದು ಸಾರಿಗೆ ಸಂಸ್ಥೆಗಳ ಆರ್ಥಿಕ ಹಿತದೃಷ್ಟಿಯಿಂದ ಅನಿವಾರ್ಯವಾಗಿರುತ್ತದೆ. ಆದಾಗ್ಯೂ, ಸಾರ್ವಜನಿಕ ಪ್ರಯಾಣಿಕರಿಗೆ ಹೆಚ್ಚಿನ ಆರ್ಥಿಕ ಹೊರೆಯಾಗದಂತೆ ಪ್ರಯಾಣ ದರ ಪರಿಷ್ಕರಣೆ ಮಾಡಲಾಗುತ್ತಿದೆ.<br>ಸಾರಿಗೆ ಆದಾಯ ಸೋರಿಕೆ ತಡೆಗಟ್ಟುವ ನಿಟ್ಟಿನಲ್ಲಿ ವಾಹನ ತನಿಖಾ ಕಾರ್ಯವನ್ನು ಚುರುಕುಗೊಳಿಸಲಾಗಿದೆ ಮತ್ತು ಅನಾವಶ್ಯಕ ವೆಚ್ಚಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಟಿಡಿ 161 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು